ಡಾ॥ ಜಿ. ಎಸ್. ದೀಕ್ಷಿತ್

# ಹಳೇಬೀಡು ಪುರಾತನ ಚರಿತ್ರೆ : ಪರಿಶೀಲನೆ

'ಹಳೇಬೀಡು ಪುರಾತನ ಚರಿತ್ರೆ' ಎನ್ನುವ ಈ ಗ್ರಂಥವು ಗತಿಸಿದ ಹಳೇಬೀಡು ಪಟೇಲ್ ಶಿವನಂಜೇಗೌಡರಿಂದ ರಚಿಸಲ್ಪಟ್ಟು ಬೆಂಗಳೂರು ಗೌರ್ನಮೆಂಟ್ ಮುದ್ರಾಲಯ ದಲ್ಲಿ ೧೮೯೯ ರಲ್ಲಿ ಮುದ್ರಿಸಲ್ಪಟ್ಟಿತು. ಈ ಪುಸ್ತಕದ ಒಂದು ಪ್ರತಿಯನ್ನು ದಿವಂಗತ ಶ್ರೀ ಸಕಲೇಶಪುರದ ಶ್ರೀಕಂಠಯ್ಯನವರ ಮಕ್ಕಳು ಶ್ರೀ ಎಸ್. ರಾಮಚಂದ್ರ ಅವರು ನನಗೆ ಓದಲಿಕ್ಕೆ ಕೊಟ್ಟಿದ್ದಕ್ಕೆ ಅವರಿಗೆ ನನ್ನ ವಂದನೆಗಳು. ಈ ಲೇಖನದ ಉದ್ದೇಶ ಈ ಪುಸ್ತಕದ ಕಿರುಪರಿಚಯ. ಈ ಪುಸ್ತಕದ ಕೊನೆಯ ಭಾಗದಲ್ಲಿ ಶ್ರವಣಬೆಳ್ಗೊಳದಲ್ಲಿ ಗಲಾಟೆಯಾಯಿತು, ಆಗ (೧೮೯೬-೯೭) ಗುಜರಾತಿ ದೇಶಸ್ಥರು ಅಲ್ಲಿಯ ಜೈನಧರ್ಮಗ್ರಂಥಗಳನ್ನು ಮೂಡಬಿದಿರೆಗೆ ರವಾನಿಸಿದರು ಎಂದಿದೆ.[1] ೧೮೯೯ ರಲ್ಲಿ ಇದರ ಮುದ್ರಣವಾಗಿರುವು ದರಿಂದಲೂ ಅಷ್ಟೊತ್ತಿಗೆ ಲೇಖಕರು ಗತಿಸಿದ್ದ ರೆಂದು ಹೇಳಿರುವುದರಿಂದಲೂ ಈ ಗ್ರಂಥದ ಬರವಣಿಗೆ, ಲೇಖಕರು ಗತಿಸಿದ್ದು ಮತ್ತು ಪುಸ್ತಕದ ಮುದ್ರಣಗಳು ಕ್ರಮವಾಗಿ ೧೮೯೭ ರಿಂದ ೧೮೯೯ ರೊಳಗೆ ಆದವು. ಗ್ರಂಥವನ್ನು ಸು. ೧೯೦೦ ರಲ್ಲಿ ಬರೆದರೆಂದು ಇಟ್ಟುಕೊಳ್ಳ ಬಹುದು.

ಹಿಂದಿನ ಕಾಲದ ಪಟೇಲರಿಗೆ ತಮ್ಮ ಊರಿನ ಬಗ್ಗೆ ಇದ್ದ ಅಭಿಮಾನಕ್ಕೆ ಈ ಪುಸ್ತಕ ಒಂದು ನಿದರ್ಶನ. ಈ ಪಟೇಲರಲ್ಲಿ ಅಭಿಮಾನದ ಜತೆಗೆ ವಿದ್ವತ್ತು ಮತ್ತು ವಿನಯಗಳು ಕೂಡಿದ್ದವು. ಪೀಠಿಕೆಯಲ್ಲಿನ ಈ ವಾಕ್ಯ ಇದನ್ನು ಸ್ಪಷ್ಟಪಡಿಸುತ್ತದೆ : 'ಅಲ್ಪಜ್ಞನಾದ ನಾನು ಹಳೇಬೀಡು ಪುರಾತನ ಚರಿತ್ರೆಯನ್ನು ಸಂಗ್ರಹಿಸಿಕೊಂಡು ಸಿಕ್ಕಿದ ಶಿಲಾಶಾಸನದ ಸಹಾಯದಿಂದಲೂ ಪುರಾತನ ಕವಿ ಗಳಿಂದ ರಚಿತವಾದ ಕಾವ್ಯಗಳ ಆಧಾರದಿಂದಲೂ ಪ್ರತ್ಯಕ್ಷ ತೋರುವ ಸಾಕ್ಷಿಯಿಂದಲೂ ತೋಚಿದಮಟ್ಟಿಗೆ ವಿವರಿಸುತ್ತೇನೆ." ಈ ವಾಕ್ಯದಲ್ಲಿ ಹೇಳಿರುವ ಹಾಗೆ ರಾಘವಾಂಕ ಮತ್ತು ಕೆರೆಯಪದ್ಮರಸರ ಕಾವ್ಯಗಳನ್ನೂ ಚೆನ್ನಬಸವಪುರಾಣವನ್ನೂ ಲೇಖಕರು ಉಪಯೋಗಿಸಿ ಕೊಂಡಿದ್ದಾರೆ.

ಈ ಪುಸ್ತಕದಲ್ಲಿ ಎರಡು ಭಾಗಗಳಿವೆ. ಮೊದಲಿನ ಭಾಗದಲ್ಲಿ ೫೦ ಪುಟಗಳಲ್ಲಿ ಹೊಯ್ಸಳರ ಇತಿಹಾಸವಿದೆ. ಎರಡನೇ ಭಾಗದಲ್ಲಿ ೫೧ ರಿಂದ ೧೨೩ ಪುಟಗಳವರೆಗೆ ಹೊಯ್ಸಳೇಶ್ವರ ದೇವಸ್ಥಾನದ ವಿವರವಾದ ವರ್ಣನೆ ಯಿದೆ. ಮೊದಲಿನ ಭಾಗದಲ್ಲಿ 'ಹೊಯ್ಸಳ' ಹೆಸರು ಹೇಗೆ ಬಂತು, ಮೂಲಪುರುಷನು ಆದಮೇಲೆ ರಾಜರು ಯಾರು ಯಾರು ಆಳಿದರು, ಅವರ ಆಳ್ವಿಕೆಯಲ್ಲಿ ಮುಖ್ಯವಾದ ಘಟನೆಗಳು ಯಾವು—ಈ ವಿಷಯಗಳಿವೆ. ಹೊಸದಾಗಿ ತಿಳಿದುಕೊಳ್ಳುವಂತಹವು ಒಂದೆರಡು ವಿಷಯಗಳಿವೆ. ಹೊಯ್ಸಳ ಇತಿಹಾಸವಲ್ಲದೆ, ವಿಜಯ ನಗರ ಕಾಲದಲ್ಲಿ ಹಳೇಬೀಡಿನಲ್ಲಿ ಆದ ಕೆಲವು ಬದಲಾವಣೆ ಗಳನ್ನು ಲೇಖಕರು ಹೇಳುತ್ತಾರೆ. ಇವೂ ಹೊಸವು. ಈಗ ಇವೆಲ್ಲಾ ಯಾವು ಅನ್ನುವುದನ್ನು ನೋಡೋಣ.

1. ಶಿವನಂಜೇಗೌಡ : ಹಳೇಬೀಡು ಪುರಾತನ ಚರಿತ್ರೆ, ಪು. ೪

ಎರಡನೇ ನರಸಿಂಹಬಲ್ಲಾಳನು ಸಂಸ್ಕೃತ, ಕನ್ನಡ, ಅರವ, ತೆಲುಗು, ಮರಾಠಿ, ಮೊದಲಾದ ವಿದ್ಯಾಶಾಲೆಗಳನ್ನು ಇಡಿಸಿದನೆಂದು ಚರಿತ್ರೆಯಿಂದಲೂ ಶಾಸನದಿಂದಲೂ ತಿಳಿಯಬರುತ್ತದೆಂದು ಈ ಪುಸ್ತಕದಲ್ಲಿದೆ.[2] ಮೂರನೇ ನರಸಿಂಹಬಲ್ಲಾಳನ ತಿರುಮಕೂಡಲ ತಾಲ್ಲೂಕಿನ ತಡಿ ಮಾಲಿಂಗಿ ಶಾಸನದಿಂದ ಈ ತರಹ ಶಾಲೆಗಳಿದ್ದವೆನ್ನುವುದಕ್ಕೆ ಒಂದು ಉದಾಹರಣೆಯಿದೆ. ೧೨೯೦ನೆಯ ಇಸ್ವಿಯ ಈ ಶಾಸನದಲ್ಲಿ "ನಾಗರಕಂನಡ ತಿಗುಳಾರ್ಯ್ಯನವನೋದಿಸುವ ಬಾಲಶೀಕ್ಷೆ ಉಪಾಧ್ಯರ ಜೀವಿತಕ್ಕೆ ವರ್ಷ ೧ಕ್ಕೆ ಗದ್ಯಾಣ ಆರು" ಎಂತಿದೆ.[3] ತಿಗುಳಾರ್ಯ್ಯ ಎಂದು ಈ ಶಾಸನದಲ್ಲಿ ಬರುವ ಶಬ್ದಕ್ಕೆ ಇದುವರೆಗೂ ತಮಿಳು ಮರಾಠಿ ಎಂದು ಅರ್ಥಮಾಡಿ, ಸಂಸ್ಕೃತ, ಕನ್ನಡ, ತಮಿಳು, ಮರಾಠಿಗಳನ್ನು ಮಾಲಂಗಿಯಲ್ಲಿ ಕಲಿಸುವ ವ್ಯವಸ್ಥೆಯಿತ್ತೆಂದು ಹೇಳಲಾಗಿದೆ. ಆದರೆ ತಿಗುಳಾರಿ ಎನ್ನುವ ಹಳೆಯ ಲಿಪಿ ನಮ್ಮಲ್ಲಿತ್ತು. ಈ ಲಿಪಿಯಲ್ಲಿರುವ ಅನೇಕ ಹಸ್ತಪ್ರತಿಗಳು ಪಶ್ಚಿಮ ತೀರದ ಪ್ರದೇಶದಲ್ಲಿ ಸಿಗುತ್ತವೆ. ಆದ್ದರಿಂದ ಈ ಶಾಸನದಲ್ಲಿ ಬರುವ ತಿಗುಳಾರ್ಯ್ಯ ಶಬ್ದಕ್ಕೆ ಈ ಲಿಪಿಯನ್ನು ಕಲಿಸಿತ್ತಿದ್ದರೆಂದು ಅರ್ಥ ಮಾಡಬೇಕೆನ್ನುವ ಅಭಿಪ್ರಾಯವು ಈಚೆಗೆ ಬಂದಿದೆ. ಆದರೆ ಪ್ರಸ್ತುತ ಪುಸ್ತಕದಲ್ಲಿ ಮೇಲೆ ಹೇಳಿದ ಹಾಗೆ ಅರವ ಮರಾಠಿಗಳನ್ನು ಶಾಲೆಗಳಲ್ಲಿ ಕಲಿಸುವ ಏರ್ಪಾಡು ಇತ್ತೆನ್ನುವುದನ್ನು ನೋಡಿದರೆ ತಿಗುಳಾರ್ಯ್ಯ ಶಬ್ದಕ್ಕೆ ಮೊದಲಿನ ಅರ್ಥವನ್ನು ಮಾಡಬಹುದೆಂದು ತೋರುತ್ತದೆ.

ವಿಜಯನಗರ ಸ್ಥಾಪನೆಯ ಬಗ್ಗೆ ತೆಲುಗು ಮತ್ತು ಕನ್ನಡ ಜನಗಳಲ್ಲಿ ವಾದವಿರುವುದು ಸರ್ವವಿದಿತ. ಈ ಪುಸ್ತಕದಲ್ಲಿ ಕನ್ನಡ ವಾದಕ್ಕೆ ಬೆಂಬಲ ಸಿಗುವ ಕೆಲವು ವಿವರಗಳಿವೆ. ಈಗ ಅವುಗಳನ್ನು ನೋಡೋಣ. ಈ ಗ್ರಂಥದಲ್ಲಿ ನರಸಿಂಹಬಲ್ಲಾಳ II ನ ಆಳ್ವಿಕೆಯನ್ನು ವರ್ಣಿಸುತ್ತಾ ಹೀಗೆ ಹೇಳಿದೆ: ಇದೇ ರಾಜನು "ದೆಹಲಿ ಚಕ್ರವರ್ತಿಗಳು ಆಶೆಯಿಂದ ತಲೆಹಾಕುವುದನ್ನು ತಿಳಿದು ತನ್ನ ದೇಶಕ್ಕೆ ಕಡೆಯ ಗಡಿಯಾಗಿಯೂ ಶತ್ರುಗಳು ಬರುವ ಮಾರ್ಗವಾಗಿಯೂ ಇರುವ ಹಂಪೆಯ ಕ್ಷೇತ್ರದ ಬಳಿ ಹೊಸಮಲೆದುರ್ಗವೆಂಬ ಪಟ್ಟಣವಂ ಕಟ್ಟಿ ದ್ವಾರಸಮುದ್ರದ ಹಿರಿಯ ತಳವಾರನನ್ನು ಅಲ್ಲಿ ಇಟ್ಟನು. ಅವನ ಮಗ ಕಂಪಿಲನು, ಆತನ ಸುತ ಕೊಮಾರ ರಾಮನು."[4] ಈ ಘಟನೆಗಳೆಲ್ಲಾ ಎರಡನೇ ನರಸಿಂಹ ಬಲ್ಲಾಳನ ಕಾಲದಲ್ಲಿ ಆಗಿರಲಿಕ್ಕಿಲ್ಲ. ಆಗ ದೆಹಲಿ ಸುಲ್ತಾನರು ದಕ್ಷಿಣಕ್ಕೆ ಬರುವ ಭೀತಿ ಇರಲಿಲ್ಲ. ಈ ಭೀತಿ ಹುಟ್ಟಿದ್ದು ಮೂರನೇ ಬಲ್ಲಾಳನ ಕಾಲದಲ್ಲಿ. ಆದ್ದರಿಂದ ಅವನೇ ಹೊಸಮಲೆದುರ್ಗವನ್ನು ಹಂಪೆಯ ಪರಿಸರದಲ್ಲಿ ಕಟ್ಟಿರಬೇಕು. ಅವನೇ ದ್ವಾರಸಮುದ್ರದ ಹಿರಿಯ ತಳವಾರನನ್ನು ಅಲ್ಲಿ ಇಟ್ಟಿರಬೇಕು. ಈತನು ಮುಮ್ಮಡಿ ಸಿಂಗೆಯನಾಯಕ. ಎನ್. ವೆಂಕಟರಮಣಯ್ಯನವರು ಮುಮ್ಮಡಿಸಿಂಗೆಯನಾಯಕನು ಯಾದವ ಸೇವೆಯಲ್ಲಿ ಮುಂದಕ್ಕೆ ಬಂದನೆಂದು ಬರೆಯುತ್ತಾರೆ. ಅದಕ್ಕೆ ವಿರುದ್ಧವಾಗಿ ಅವನು ಹೊಯ್ಸಳರ ಸೇವೆಯಲ್ಲಿದ್ದವನು, ಅವನ ಮಗ ಕಂಪಿಲರಾಯ, ತಂದೆ-ಮಗ ಇಬ್ಬರೂ ಮೂರನೇ ಬಲ್ಲಾಳನ ಜತೆಗೆ ಹೊಡೆದಾಡಿದರು. ಆಗಿನ ಕಾಲದಲ್ಲಿ ಇದು ಏನೂ ಆಶ್ಚರ್ಯವನ್ನುಂಟು ಮಾಡುವ ವಿಷಯವಾಗಿರಲಿಲ್ಲ. ಹೊಯ್ಸಳರು ಕಲ್ಯಾಣದ ಚಾಲುಕ್ಯರ ಸೇವಕರು. ಆದರೆ ಅವರ ಜತೆಗೆ ಹೊಡೆದಾಡಿದರು. ಅದೇ ರೀತಿ ಅವರ ಸೇವಕರಾದ ಕಂಪ್ಲಿಯ ರಾಜರು ಅವರ ಜತೆಗೆ ಹೊಡೆದಾಡಿದರು. ಈ ಗ್ರಂಥದಿಂದ ಮೂರನೇ ವೀರಬಲ್ಲಾಳ ಹಂಪೆಯ ಹತ್ತಿರ ಒಂದು ಹೊರಕೋಟೆ ಕಟ್ಟಿದನೆನ್ನುವ ಕನ್ನಡಿಗರ ವಾದಕ್ಕೆ ಪುಷ್ಟಿ ದೊರಕುತ್ತದೆ. ಅಲ್ಲದೆ ಕಂಪಿಲರಾಯನ ವಂಶಸ್ಥರು ಮೊದಲಿಗೆ ಹೊಯ್ಸಳರ ಸೇವಕರಾಗಿದ್ದರೆನ್ನುವ ಹೊಸ ವಿಷಯವನ್ನು ಈ ಪುಸ್ತಕದಿಂದ ತಿಳಿದುಕೊಳ್ಳುತ್ತೇವೆ.

ಈ ಇತಿಹಾಸ ವಿಭಾಗದಲ್ಲಿ ವಿಜಯನಗರದ ಕಾಲದ ಕೆಲವು ಹೊಸ ವಿಷಯಗಳು ತಿಳಿಯುತ್ತವೆ. ವಿಜಯನಗರ ಕಾಲದಲ್ಲಿ ಹಳೇಬೀಡು ಸಂಪೂರ್ಣವಾಗಿ ಶಿಥಿಲವಾಗಿ ಜನಸಂಚಾರಕ್ಕೆ ಅಸಹ್ಯವಾಗಿತ್ತು. ಅಲ್ಲಿಯ ಅರಸರು ಈ ಊರಿನ ಹಿಂದಿನ ವೈಭವಯುತ ಇತಿಹಾಸವನ್ನು ತಿಳಿದು

2. ಪು. ೧೧
3. ಎ. ಕ., V (ಹೊಸತು), ತಿನ ೨೩೮
4. ಹಳೇಬೀಡು ಪುರಾತನ ಚರಿತ್ರೆ, ಪು. ೧೧

ಕೊಂಡು, ಅದಕ್ಕೆ ಹೊಸಕೋಟೆ ಕಟ್ಟಿಸಿ ಆ ಊರಿಗೆ ಜೀರ್ಣಬೀಡೆಂದು ಹೆಸರು ಇಟ್ಟರು. ಅಲ್ಲಿಯ ದೇವಸ್ಥಾನಗಳಲ್ಲಿ ಬಿದ್ದುಹೋಗುವ ಭಾಗಗಳಲ್ಲಿ ಕಂಭಗಳನ್ನು ನಿಲ್ಲಿಸಿ ದೇವಸ್ಥಾನಗಳನ್ನು ಬೀಳದಹಾಗೆ ಉಳಿಸಿದರು. ಈ ಕಂಭಗಳನ್ನು ಪ್ರೌಢರಾಯನ ಕಂಭಗಳೆಂದು ಕರೆಯಲಾಗಿದೆ. ಈ ಹೆಸರಿನಿಂದ ಈ ಪುನರುಜ್ಜೀವನ ಕಾರ್ಯವು ಪ್ರೌಢರಾಯ ಅಂದರೆ ಎರಡನೇ ದೇವರಾಯನ ಕಾಲದಲ್ಲಿ ಆಯಿತೆನ್ನಬಹುದು. ಇದರ ಜತೆಗೆ ಜೀರ್ಣಬೀಡನ್ನು ವಿಜಯನಗರದ ಅರಸರು ಒಂದು ಆಡಳಿತ ಕೇಂದ್ರವನ್ನಾಗಿ ಮಾಡಿದರು. ಇಂತಹ ಕೇಂದ್ರಗಳಿಗೆ ಅವರು ಕಟ್ಟೆಮನೆ ಎನ್ನುತ್ತಿದ್ದರು. ಗ್ರಾಮಗಳಲ್ಲಿ ಇತ್ಯರ್ಥವಾಗದ ವ್ಯಾಜ್ಯಗಳನ್ನು ಕಟ್ಟೆಮನೆಗಳಿಗೆ ಕಕ್ಷಿಗಾರರು ತೆಗೆದುಕೊಂಡು ಹೋಗುತ್ತಿದ್ದರು. ಜೀರ್ಣಬೀಡನ್ನು ಒಂದು ಕಟ್ಟೆಮನೆ ಮಾಡಿದ್ದರಿಂದ ಅದಕ್ಕೆ ಸ್ವಲ್ಪ ಪ್ರಾಶಸ್ತ್ಯ ಬಂತು.[5] ಮುಂದೆ ಜೀರ್ಣಬೀಡು ಹಳೇಬೀಡು ಆಯಿತು.

ಈ ಇತಿಹಾಸ ವಿಭಾಗದಲ್ಲಿಯೆ, ಹಳೇಬೀಡಿನ ಹಳೆಯಕೋಟೆ ಹೊಸಪೇಟೆಗಳು, ಅರಮನೆಯಿದ್ದ ಭಾಗ, ರಾಣೀವಾಸ, ಗೋವಿನಪುರವೆಂಬ ದನಗಳನ್ನು ಕಟ್ಟುವ ಭಾಗ, ಹುವ್ವೇನಹಳ್ಳಿ (ಹೂವಾಡಿಗರ ಕೇರಿ), ಒಂಟೆಗಳು ನಿಲ್ಲುವ ಸ್ಥಳ, ಇತ್ಯಾದಿ ಬೇರೆ ಬೇರೆ ಭಾಗಗಳನ್ನು ಲೇಖಕರು ಗುರುತಿಸಿದ್ದಾರೆ. ಇಂತಹ ವಿವರವಾದ ಹಳೇಬೀಡಿನ ವರ್ಣನೆ ಇದೇ ಮೊದಲನೆಯದು. ಇದರ ಸಹಾಯದಿಂದ ಆ ಕ್ಷೇತ್ರದಲ್ಲಿ ಉತ್ಖನನ ಮಾಡುವ ಹಾಗೆ ಇದೆ. ಕರ್ನಾಟಕದಲ್ಲಿ ಹಂಪೆಯಂತೆ ವಿಶಾಲವಾದ ರಾಜಧಾನಿ ಇದಾಗಿತ್ತು.[6]

ಎರಡನೆಯ ಭಾಗದಲ್ಲಿ ಹೊಯ್ಸಳೇಶ್ವರ ದೇವಸ್ಥಾನದ ವಿವರವಾದ ವರ್ಣನೆ ಇದೆ. ಈ ವರ್ಣನೆ ಇವತ್ತೂ ಓದುವ ಹಾಗೆ ಇದೆ. ಇಷ್ಟು ವಿಸ್ತೃತವಾದ ವರ್ಣನೆ ಎಲ್ಲಿಯೂ ಸಿಗುವುದಿಲ್ಲ. ಈ ಭಾಗವನ್ನೇ ಪುನಃ ಮುದ್ರಿಸಿದರೆ ಆ ದೇವಸ್ಥಾನಕ್ಕೆ ಒಳ್ಳೆಯ ಕೈಪಿಡಿಯಾಗಬಲ್ಲದು ಅಲ್ಲದೆ, ಅವತ್ತಿಗೂ ಇವತ್ತಿಗೂ ಎಷ್ಟೋ ವಿಗ್ರಹಗಳು ಹಾಳಾಗಿರಬಹುದು. ಇಲ್ಲವೆ ಕಳವಾಗಿರಬಹುದು. ಅಂತಹ ವಿಗ್ರಹಗಳ ಅಪೂರ್ವ ವರ್ಣನೆ ಇಲ್ಲಿ ಸಿಗುತ್ತದೆ. ಈಗಿನ ಕಲೆಯ ವಿದ್ವಾಂಸರು ಕನ್ನಡದಲ್ಲಿ ಬರೆದರೆ ಇಂಗ್ಲೀಷ್ ವರ್ಣನೆಯ ಭಾಷಾಂತರವಿದ್ದ ಹಾಗೆ ಇರುತ್ತದೆ. ಪಟೇಲರಿಗೆ ಇಂಗ್ಲೀಷ್ ಬರುತ್ತಿತ್ತೊ ಇಲ್ಲವೊ ಗೊತ್ತಿಲ್ಲ. ಅವರ ವರ್ಣನೆಯಲ್ಲಿ ಇಂಗ್ಲೀಷಿನ ಛಾಯೆ ಇಲ್ಲ. ಎಷ್ಟೋ ಸಲ ಸುಂದರವಾದುದನ್ನು ವರ್ಣಿಸಲಿಕ್ಕೆ ನಮ್ಮಲ್ಲಿ ಶಬ್ದಗಳಿರುವುದಿಲ್ಲ. ಈ ಗ್ರಂಥದಲ್ಲಿ ಶಿಲ್ಪ ಸೌಂದರ್ಯವನ್ನು ಸರಿಯಾಗಿ ವರ್ಣಿಸುವ ಶಬ್ದ ಸಂಪತ್ತು ಇದೆ. ವರ್ಣನೆ ಹೇಗೆ ಮಾಡಬೇಕೆಂಬುದನ್ನು ಕಲಿಯುವ ಹಾಗೆ ಇದೆ. ದೇವಸ್ಥಾನದ ಸೌಂದರ್ಯವನ್ನು ಕುರಿತು ಲೇಖಕರು ಹೀಗೆ ಹೇಳುತ್ತಾರೆ: "ಈ ದೇವಸ್ಥಾನವು ನೋಟಕರನ್ನು ತಮ್ಮ ತಮ್ಮ ಕೆಲಸ ಕಾರ್ಯಗಳ ತೊರೆಯಿಸಿ ನಿರ್ವಿಣ್ಣ ಹೃದಯನನ್ನೇ ಮಾಡಿ ಬಲೆಯೊಳ್ ಸಿಕ್ಕಿದ ಮೃಗದಂತೆ ಹೊರ ಬಿಡದೆ ಅಲ್ಲಿಯೆ ನಿಲ್ಲಿಸುವುದು."[7] ಗರ್ಭಗುಡಿಯ ಬಾಗಿಲಲ್ಲಿ ಎರಡು ದ್ವಾರಪಾಲಕರ ವಿಗ್ರಹಗಳಿವೆ. ಅವುಗಳವರ್ಣನೆ ನೋಡಿ: "ಇವುಗಳು ಕಿರೀಟದೊಳು ವಿರಳವಾಗಿ ಬಿಡಿಸಿದ ರುಂಡಮಾಲೆಗಳಿಂದಲೂ ನೇರವಾಗಿ ಸುತ್ತಿದ ಕಿರುಜಡೆಗಳಿಂದಲೂ ಇವುಗಳೊಳು ತೋರ್ಪ ವಿಚಿತ್ರವಾದ ಕೆಲಸದಿಂದಲೂ ಹಣೆಯ ಮೇಲೊಪ್ಪುವ ಸುರುಳಿರೋಮಗಳಿಂದಲೂ ಕಿರುನೋಟದ ಗಾಂಭೀರ್ಯದ ಅಂಗಾಂಗದೊಳು ಆಭರಣವಾಂತು ಓರೆಯಾಗಿ ನಿಂತು ಗದೆ, ತ್ರಿಶೂಲ, ಡಮರುಗಳ ಪಿಡಿದು ಹಾರ ಹೀಲಾವಳಿಗಳಿಂದ ಸಿಂಹನೋಪಾದಿ ಗಂಡು ಫಣದೊಡನೆ ವ್ಯತ್ಯಾಸ ಪಾದವಿಟ್ಟು ನಡುವಿನೊಳು ಒಳ ಉಡಿಗೆ, ವೀರಗಾಸೆ, ಮಲ್ಲಗಂಟು, ಕೀರ್ತಿಮುಖ ಯುಕ್ತವಾಗಿವೆ. ಪಾರ್ಶ್ವಗಳಲ್ಲಿ ಚಾಮರವಾಂತ ಸ್ತ್ರೀ ವಿಗ್ರಹಗಳ ಮೇಲ್ಗಡೆ ದ್ರಾಕ್ಷೀಲತೆಯ ಜಾಲರಿಯಂತೆ ಬಿಡಿಸಿದ್ದಾನೆ. ಶಿರದೊಳು ಧರಿಸಿದ ಕಿರೀಟದ ವಿಚಿತ್ರವಾದ ಕೆಲಸವ ವರ್ಣಿಸಲಸಾಧ್ಯ."[8]

---

5. ಅದೇ, ಪು. ೨೫-೬
6. ಅದೇ, ಪು. ೨೦-೩
7. ಅದೇ, ಪು. ೧೨೩
8. ಅದೇ, ಪು. ೧೨೦

ಬೇಲೂರು - ಹಳೇಬೀಡುಗಳ ದೇವಸ್ಥಾನಗಳಲ್ಲಿಯ ಸ್ತ್ರೀ ವಿಗ್ರಹಗಳ ಸೌಂದರ್ಯ ಜಗತ್ಪ್ರಸಿದ್ಧ. ಹೂಗುಚ್ಛ ಕೈಯೆತ್ತಿ ತುದಿ ಬೆರಳ ತೋರುವ ಸ್ತ್ರೀ ಪ್ರತಿಮೆಯ ಈ ವರ್ಣನೆಯನ್ನು ನೋಡಿ: "ಅಮೃತ ಕಲಶವನಾಂತು ಚಾಮರವ ಪಿಡಿದು ತೋಳೆತ್ತಿ ಕೈಯಾಡಿಸುವ ಅಂದವ್ನು, ಕರವೆತ್ತಿ ಕುಸುಮಗಳ ಕೊಯ್ಯುವ ಚಂದದಿ ಅಂಗವ ತೋರುವ ಸ್ತ್ರೀಯಳು ಓರೆಯಾದ ಸೆರಗ ಕರದೊಳು ಪಿಡಿದು ಜಗ್ಗಿದಂಗದೊಡನೆ ಹಾರ ಹೀರಾವಳಿಗಳಿಂದ ಮುಖಚಂದ್ರಿಕೆಯೊಳು ನರ್ತಿಸುವ ಮುಂಗುರುಳಿನೊಳು ಅರೆನೋಟದ ಬಿರುದುಟಿಯಿಂದ ಚಕ್ರಾಕಾರದ ಮುಡಿಯೊಳುಪ್ಪುವುದು ಮನೋಹರವಾಗಿದೆ." [9]

ಭಾರತೀಯ ವಾಸ್ತುಶಿಲ್ಪದ ಇತಿಹಾಸವನ್ನು ಮೊಟ್ಟ ಮೊದಲಿಗೆ ಅಧಿಕಾರಯುತವಾಗಿ ಬರೆದಿರುವ ಯುರೋಪಿಯನ್ ವಿದ್ವಾಂಸ ಫರ್ಗೂಸನ್ ಭಾರತವನ್ನೆಲ್ಲಾ ಸುತ್ತಾಡಿ ನಮ್ಮ ಎಲ್ಲಾ ಪುರಾತನ ಕಟ್ಟಡಗಳನ್ನು ಪರೀಕ್ಷಿಸಿ ಅವುಗಳನ್ನು ವರ್ಗೀಕರಿಸಿ ಅವುಗಳ ಮೌಲ್ಯಮಾಪನ ಮಾಡಿದ್ದಾನೆ. ಆತನಿಗೆ ಯುರೋಪಿಯನ್ ವಾಸ್ತುಶಿಲ್ಪದ ಇತಿಹಾಸದ ಅಧ್ಯಯನದಲ್ಲಿಯೂ ಅಷ್ಟೆ ಪರಿಣಿತೆ ಇತ್ತು. ಅವನ ಪ್ರಕಾರ ಗ್ರೀಕರ ಕಟ್ಟಡಗಳಲ್ಲಿ ಪಾರ್ಥೆನಾನ್ ಹೇಗೆ ಅತಿ ಸುಂದರವೊ ಹಾಗೆ ಭಾರತೀಯ ದೇವಸ್ಥಾನಗಳಲ್ಲಿ ಹೊಯ್ಸಳೇಶ್ವರ ದೇವಸ್ಥಾನವು ಅಷ್ಟೆ ಸುಂದರವೆಂದಿದ್ದಾನೆ. [10] ಪಟೇಲ್ ಶಿವನಂಜೇಗೌಡರಿಗೆ ಫರ್ಗೂಸನ್ನನ ಬರಹ ಗೊತ್ತಿತ್ತೊ ಇಲ್ಲವೊ ತಿಳಿಯದು. ಆದರೆ ಅವರು ಇಲ್ಲಿಯ ಶಿಲ್ಪಗಳಲ್ಲಿ ದೂರದರ್ಶಕ ಯಂತ್ರವನ್ನು ಉಲ್ಲೇಖಿಸಿರುವುದರಿಂದಲೂ ಮತ್ತು ಅದನ್ನು ಟೆಲಿಸ್ಕೋಪ್ ಎಂದು ಕರೆಯುವುದರಿಂದಲೂ ಯುರೋಪಿಯನ್ನರು ಪತ್ತೆ ಮಾಡಿದ ಈ ವಿಷಯ ಗೊತ್ತಿತ್ತೆಂದು ಹೇಳಬಹುದು. ಪಟೇಲರಿಗೆ ಪಾಶ್ಚಿಮಾತ್ಯರ ಬರವಣಿಗೆ ಗೊತ್ತಿರಲಿ ಗೊತ್ತಿಲ್ಲದೆ ಇರಲಿ, ಸಂಸ್ಕೃತ ಮತ್ತು ಕನ್ನಡ ಸಾಹಿತ್ಯಗಳು ಚೆನ್ನಾಗಿ ಗೊತ್ತಿದ್ದವು. ಹೊಯ್ಸಳೇಶ್ವರ ದೇವಸ್ಥಾನವು ಶ್ರೀಚಕ್ರದಿಂದ ಕಟ್ಟಿದೆ. ಶ್ರೀಚಕ್ರಕ್ಕೆ ಪ್ರತಿ ಮೂಲೆಯೂ ಪ್ರತಿ ಕಂಭವೂ ಮೂಲೆ ಮೂಲೆಗಳಿಂದಲೇ ಶಿಲ್ಪಶಾಸ್ತ್ರ ಮರ್ಯಾದಾನುಸಾರವಾಗಿ ನಿರ್ಮಿಸಿವೆಯೆಂದು ಹೇಳಿದ್ದಾರೆ. [11] ಅವರು ಈ ವಿಗ್ರಹಗಳನ್ನು ಮತ್ತು ವಿಗ್ರಹಗಳು ಹೇಳುವ ಕಥೆಗಳನ್ನು ವರ್ಣಿಸಲು ಅನೇಕ ಪುರಾಣಗಳನ್ನು ಉದಾಹರಿಸುತ್ತಾರೆ. ಅವುಗಳಲ್ಲಿ ಕೆಲವು ಇವು: ಭವಿಷತ್‌ಪುರಾಣ, ದೇವೀಭಾಗವತ, ಭಾಗವತ, ಅದರಲ್ಲೂ ದಶಮಸ್ಕಂಧ, ಶಂಕರಸಂಹಿತೆ, ಸೂತಸಂಹಿತೆ, ಲೈಂಗಪುರಾಣ, ಶೈವಪುರಾಣದ ಧರ್ಮಸಂಹಿತೆ, ಮಹಾಭಾರತ ಮತ್ತು ರಾಮಾಯಣ. ನರ್ತಕ ನರ್ತಕಿಯರು ಭರತಶಾಸ್ತ್ರ ರೀತ್ಯಾ ನರ್ತಿಸುತ್ತಾರೆಂದು ಮತ್ತು ಪ್ರತಿಮೆಗಳು ಕಳಾಶಾಸ್ತ್ರ ರೀತ್ಯಾನುಸಾರವಾಗಿ ದ್ವಾರಕ ಚುಂಬನ ಮತ್ತು ಷೋಡಶ ಬಂಧನಯುಕ್ತವಾಗಿವೆಯೆಂದು ಬರೆದಿದ್ದಾರೆ. [12]

ಲೇಖಕರು ಈ ಗ್ರಂಥದ ಬೇರೆ ಬೇರೆ ಕಡೆ ಹಳೇಬಿಡೀನ ದೇವಸ್ಥಾನಗಳು ಹಾಳಾಗುವುದಕ್ಕೆ ಕಾರಣಗಳನ್ನು ತಿಳಿಸಿದ್ದಾರೆ: "ಕೆಲವು ನೆಲಸಮನಾಗಿ ಬಿದ್ದ ಕಲ್ಲುಗಳನ್ನು ಕೋಟೆ ಕೊತ್ತಲು, ಹಳ್ಳ, ಭಾವಿ, ಕಟ್ಟೆ, ಇವುಗಳಿಗೆ ಸೇರಿಸಿದ್ದಾರೆ. ನಿಂತ ಕೆಲವು ದೇವಸ್ಥಾನದ ವಿಗ್ರಹಗಳ ಕಲ್ಲುಗಳು ಅಲ್ಲಿಯೇ ಭೂಗತವಾಗಿವೆ.... ಸ್ವದೇಶ ಪರದೇಶದವರು ನೋಟಕ್ಕಾಗಿ ಬಂದವರು ಸಲಕ್ಷಣ ವಿಗ್ರಹಗಳನ್ನು ಅಪಹರಿಸಿಕೊಂಡು ಹೋಗಿದ್ದಾರೆ." [13] ಪರದೇಶದವರು ಅಪಹರಿಸಿದ್ದಕ್ಕೆ ಲೇಖಕರು ಒಂದು ಉದಾಹರಣೆಯನ್ನು ಕೊಡುತ್ತಾರೆ. ೧೭೯೯ರಲ್ಲಿ ಶ್ರೀರಂಗ

---

9. ಅದೇ, ಪು. ೯೬

10. ಡಾ॥ ಎಂ. ಶೇಷಾದ್ರಿ ಅವರು ತಮ್ಮ ಲೇಖನದಲ್ಲಿ ಉಲ್ಲೇಖಿಸಿರುದು—Dr. B Sheik Ali (Ed.): The Hoysala Dynasty, p. 183

11. ಹಳೇಬೀಡು ಪುರಾತನ ಚರಿತ್ರೆ, ಪು. ೩೧

12 ಅದೇ, ಪು. ೩೪

13. ಅದೇ, ಪು. ೩೧

ಪಟ್ಟಣದ ಪತನವಾದ ಮೇಲೆ ಲಾಲಿ ಮತ್ತು ಬೇಲಿ ಎನ್ನುವ ಇಂಗ್ಲೀಷ್ ಸರದಾರರು ಹೊಯ್ಸಳೇಶ್ವರ ದೇವಸ್ಥಾನವನ್ನು ನೋಡಿ ಆಶ್ಚರ್ಯದ ಕೆಲಸಕ್ಕೆ ಮರುಳಾಗಿ ಒಂದು ಬಸವಣ್ಣ ವಿಗ್ರಹದ ಕೊರಳ ಘಂಟೆ ಮತ್ತು ಒಂದು ಸಣ್ಣ ವಿನಾಯಕ ವಿಗ್ರಹವನ್ನು ಅಪಹರಿಸಿಕೊಂಡು ಹೋದರು.[14] ಇಂತಹ ಅಪಹರಣಗಳನ್ನು ಅನೇಕ ಯೂರೋಪಿನ ದೇಶಿಯರು ಮಾಡಿದ್ದಾರೆ. ಸಣ್ಣ ರಾಷ್ಟ್ರವಾದ ಡೆನ್ಮಾರ್ಕ್‌ನವರು ಹೊಯ್ಸಳ ವಿಗ್ರಹಗಳನ್ನು ಎಷ್ಟು ತೆಗೆದುಕೊಂಡು ಹೋಗಿದ್ದಾರೆಂದರೆ, ಈಚೆಗೆ ಕೆಲವು ವರ್ಷಗಳ ಕೆಳಗೆ, ಅವರು ಒಬ್ಬ ಭಾರತೀಯ ತಜ್ಞನನ್ನು ನೇಮಿಸಿ ಕೋಪನ್ ಹೇಗನ್ ವಸ್ತುಸಂಗ್ರಹಾಲಯದಲ್ಲಿರುವ ಹೊಯ್ಸಳ ವಿಗ್ರಹಗಳ ವಿವರವಾದ ಪಟ್ಟಿಯನ್ನು ತಯಾರು ಮಾಡಿಸಿದರು. ಸಣ್ಣರಾಷ್ಟ್ರವಾದ ಡೆನ್ಮಾರ್ಕಿನಲ್ಲೇ ಇಷ್ಟು ಹೊಯ್ಸಳ ವಿಗ್ರಹಗಳಿದ್ದರೆ, ಸಂಪದ್ಭರಿತ ವಿಶಾಲವಾದ ಅಮೇರಿಕೆಯಲ್ಲಿ ಎಷ್ಟು ಇರಬೇಡ. ಇನ್ನೂ ಇಷ್ಟು ವಿಗ್ರಹಗಳ ಅಪಹರಣಗಳು ಆಗದೆ ಇದ್ದ ಕಾಲದಲ್ಲಿ ನಮ್ಮ ಅತ್ಯಂತ ಸುಂದರವಾದ ಹೊಯ್ಸಳೇಶ್ವರ ದೇವಸ್ಥಾನದ ವರ್ಣನೆಯನ್ನು ಮಾಡಿ ಪಟೇಲ್ ಶಿವನಂಜೇಗೌಡರು ತಮ್ಮ ಊರು ಹಳೇಬೀಡಿಗೂ ಕರ್ನಾಟಕಕ್ಕೂ ಅನುಪಮ ಸೇವೆಯನ್ನು ಈ ಗ್ರಂಥದ ಮೂಲಕ ಸಲ್ಲಿಸಿದ್ದಾರೆ.

ಭಾರತ ಸರ್ಕಾರದ ಪುರಾತತ್ವ ಶಾಖೆಯವರು ನಮ್ಮ ದೇಶದ ಪುರಾತನ ಕಾಲದ ರಾಜಧಾನಿಗಳನ್ನೂ ದೊಡ್ಡ ಪಟ್ಟಣಗಳನ್ನೂ ಸಂರಕ್ಷಿಸುತ್ತಿದ್ದಾರೆ ಮತ್ತು ಅವಶ್ಯವೆನಿಸಿದರೆ ಅವುಗಳ ಕ್ಷೇತ್ರದಲ್ಲಿ ಉತ್ಖನನ ಮಾಡುತ್ತಿದ್ದಾರೆ. ಉದಾಹರಣೆಗೆ, ಅಕ್ಬರನ ರಾಜಧಾನಿಯಾಗಿದ್ದ ಫತೇಪುರ್ ಸಿಕ್ರಿಯಲ್ಲಿಯ ಕಟ್ಟಡಗಳನ್ನು ಸಂರಕ್ಷಿಸುತ್ತಿದ್ದಾರೆ, ಮತ್ತು ಹಂಪೆಯಲ್ಲಿರುವ ದೇವಸ್ಥಾನಗಳನ್ನು ಸಂರಕ್ಷಿಸುತ್ತಿದ್ದಾರೆ. ಈ ಕೆಲಸದ ಜತೆಗೆ ಉತ್ಖನನ ನಡೆಯಿಸಿ ಹಂಪೆಯ ಪುರಾತನ ಅವಶೇಷಗಳನ್ನು ಹೊರಗೆ ತೆಗೆಯುತ್ತಿದ್ದಾರೆ. ಹಳೇಬೀಡಿನಲ್ಲಿಯೂ ಕೂಡ ಹಂಪೆಯಲ್ಲಿ ಮಾಡಿದ ಹಾಗೆ ಮೇಲಿರುವ ಕಟ್ಟಡಗಳನ್ನು ಸಂರಕ್ಷಿಸಬೇಕು. ಭೂಗತವಾಗಿರುವದನ್ನು ಭೂಶೋಧನೆಯಿಂದ ಹೊರಗಡೆ ತೆಗೆಯಬೇಕು. ಇಂತಹ ಕೆಲಸಕ್ಕೆ ಶಿವನಂಜೇಗೌಡ, ಸಕಲೇಶಪುರದ ಶ್ರೀಕಂಠಯ್ಯ, ಆರ್. ನರಸಿಂಹಾಚಾರ್ಯ ಮತ್ತು ಎಂ. ಎಚ್. ಕೃಷ್ಣ ಅವರುಗಳ ಬರೆವಣಿಗೆಗಳು ಅತ್ಯಂತ ಉಪಯುಕ್ತ.

---

14. ಅದೇ. ಪು. ೩೮